# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 274 |
| 2 | ಸದಸ್ಯರ ಹೆಸರು | ಶ್ರೀ ಎಸ್.ಎಲ್.ಭೋಜೇಗೌಡ (ಶಿಕ್ಷಕರ ಕ್ಷೇತ್ರ) |
| 3 | ಉತ್ತರಿಸಬೇಕಾದ ದಿನಾಂಕ | 15.12.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಾರ್ವಜನಿಕರು ತಮ್ಮ ಜಮೀನುಗಳ ಸರ್ವೆ ಸ್ಕೆಚ್ ಮಾಡಿಸಲು ನಿಯಮಾನುಸಾರ ಶುಲ್ಕಗಳನ್ನು ಕಟ್ಟಿ 8-10 ತಿಂಗಳು ಕಳೆದರೂ ಸರ್ವೆ ಇಲಾಖೆಯವರು ಸರ್ವೆ ಸ್ಕೆಚ್ ಗಳನ್ನು ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಮಸ್ಯೆಯನ್ನು ಬಗೆಹರಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ನೀಡುವುದು) | ಬಂದಿದೆ.<br>**ಸರ್ವೆ ಸ್ಕೇಚ್ ನೀಡುವಲ್ಲಿ ಆಗುತ್ತಿರುವ ವಿಳಂಬವನ್ನು ತಪ್ಪಿಸಲು ಸರ್ಕಾರ ಕೈಗೊಂಡ ಕ್ರಮಗಳು**<br>1) ಇಲಾಖೆಯಲ್ಲಿ ಅಳತೆ ಕೋರಿ ಸ್ವೀಕೃತವಾಗುವ ಎಲ್ಲಾ ಅರ್ಜಿಗಳನ್ನು ಮೋಜಿಣಿ ತಂತ್ರಾಂಶದ ಮುಖಾಂತರ ಆನ್‌ಲೈನ್‌ನಲ್ಲಿ ದಾಖಲಿಸಲಾಗುತ್ತಿದೆ. ತಂತ್ರಾಂಶದ ಪ್ರತಿ ಹಂತದಲ್ಲಿಯೂ FIFO(ಸರದಿ ಸಾಲಿನಂತೆ) ಅಳವಡಿಸಲಾಗಿದೆ. ಪ್ರಕರಣವು ಅಳತೆಗೆ ಯೋಗ್ಯವಾಗಿದ್ದಲ್ಲಿ FIFO (ಸರದಿ ಸಾಲಿನಂತೆ) ಅಳತೆಗಾಗಿ ಭೂಮಾಪಕರಿಗೆ ತಂತ್ರಾಂಶದ ಮೂಲಕ ಆನ್‌ಲೈನ್‌ನಲ್ಲಿ ವಿತರಿಸಲಾಗುತ್ತಿದೆ. ಪ್ರಕರಣದಲ್ಲಿ ಅಳತೆಯಾದ ನಂತರ ಭೂಮಾಪಕರು ಆನ್‌ಲೈನ್‌ನಲ್ಲಿ ಕಡತಗಳನ್ನು ಅಪ್‌ಲೋಡ್ ಮಾಡಲು ಹಾಗೂ ಅಪ್ಲೋಡ್ ಮಾಡಿರುವ ಕಡತಗಳ ಪರಿಶೀಲನೆ ಮತ್ತು ಅನುಮೋದನೆಯನ್ನು ಸಹ ಆನ್‌ಲೈನ್‌ನಲ್ಲೇ ನಿರ್ವಹಿಸಲಾಗುತ್ತಿದೆ. ತಂತ್ರಾಂಶದ ಮುಖಾಂತರ, ಪ್ರಕರಣಗಳ ವಿಲೇವಾರಿಯಲ್ಲಿ ಯಾವುದೇ ವಿಳಂಬಕ್ಕೆ ಅವಕಾಶವಿಲ್ಲದಂತೆ ಕ್ರಮ ವಹಿಸಲಾಗುತ್ತಿದೆ.<br>2) ವಿಡಿಯೋ ಸಂವಾದ ಮತ್ತು ವಿಭಾಗವಾರು ಅಧಿಕಾರಿಗಳ ಸಭೆ ನಡೆಸಿ ಪರವಾನಗಿ ಭೂಮಾಪಕರ ಪ್ರಗತಿ ಪರಿಶೀಲನೆ ಮಾಡಿ ಹೆಚ್ಚಿನ ಪ್ರಗತಿ ಸಾಧಿಸಲು ಸೂಕ್ತ ಮಾರ್ಗದರ್ಶನ ಮತ್ತು ಸೂಚನೆ ನೀಡಲಾಗುತ್ತಿದೆ<br>3) ಹೆಚ್ಚಿನ ಪ್ರಕರಣಗಳು ಬಾಕಿ ಇರುವ ತಾಲ್ಲೂಕುಗಳಿಗೆ ಕಡಿಮೆ ಪ್ರಕರಣಗಳು ಬಾಕಿ ಇರುವ ತಾಲ್ಲೂಕಿನಿಂದ ಭೂಮಾಪಕರನ್ನು ನಿಯೋಜನೆ ಮಾಡಿ ಪ್ರಕರಣಗಳನ್ನು ವಿಲೇಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>4) 2072 ಪರವಾನಗಿ ಭೂಮಾಪಕರ ಆಯ್ಕೆ ಕುರಿತು ಅಧಿಸೂಚನೆ ಹೊರಡಿಸಿ ಅರ್ಜಿಗಳನ್ನು ಆಹ್ವಾನಿಸಿ, ಸಾಮಾಜಿಕ ಅಂತರ ಕಾಯ್ದುಕೊಂಡು ದಿನಾಂಕ 1-2-2021 & 2-2-2021 ರಂದು ಪರೀಕ್ಷೆಯನ್ನು ನಡೆಸಿ, ಜಿಲ್ಲಾವಾರು ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ತರಬೇತಿ ನಂತರ ಉತ್ತೀರ್ಣವಾದ 841 ಜನರಿಗೆ ಪರವಾನಗಿ ನೀಡಿದ್ದು, ಸದರಿ ಪರವಾನಗಿ ಭೂಮಾಪಕರು ರಾಜ್ಯದ ವಿವಿಧ ನಿಯೋಜಿತ ತಾಲ್ಲೂಕುಗಳಿಗೆ ಕಾರ್ಯ ನಿರ್ವಹಿಸುತ್ತಿದ್ದಾರೆ. ಪ್ರಸ್ತುತ ತರಬೇತಿ ಪೂರ್ಣಗೊಳಿಸಿರುವ 438 ಜನ ಪರವಾನಗಿ ಭೂಮಾಪಕರಿಗೆ ವಿವಿಧ ತಾಲ್ಲೂಕುಗಳಿಗೆ ಸ್ಥಳ ನಿಯೋಜನೆ ಮಾಡಲಾಗಿದೆ. ಹಾಲಿ 508 ಜನರು ತರಬೇತಿ ಪಡೆಯುತ್ತಿದ್ದು, ತರಬೇತಿ ನಂತರ ಉತ್ತೀರ್ಣರಾದವರಿಗೆ ಪರವಾನಗಿ ನೀಡಿ ರಾಜ್ಯದ ವಿವಿಧ ತಾಲ್ಲೂಕುಗಳಿಗೆ ಕಾರ್ಯ ನಿಯೋಜಿಸಲಾಗುವುದು.<br>ಇದರಿಂದ ಬಾಕಿ ಪ್ರಕರಣಗಳನ್ನು ಶೀಘ್ರವಾಗಿ ವಿಲೇವಾರಿ ಮಾಡಿ ಸರ್ವೆ ಸ್ಕೆಚ್ ಅನ್ನು ಶೀಘ್ರವಾಗಿ ವಿತರಿಸಲು ಸಾಧ್ಯವಾಗುತ್ತದೆ |
| ಆ) | ಸರ್ವೆ ಸ್ಕೆಚ್ ಮಾಡಿಕೊಡಲು ನಿಗದಿಪಡಿಸಿರುವ ಮಾನದಂಡಗಳೇನು; ಚಿಕ್ಕಮಗಳೂರು ಜಿಲ್ಲೆಯಲ್ಲಿ 3 ವರ್ಷಗಳಲ್ಲಿ ಸರ್ವೆ ಸ್ಕೆಚ್ ಮಾಡಿಕೊಡುವಂತೆ ಕೋರಿ ಎಷ್ಟು ಅರ್ಜಿಗಳು ಸ್ವೀಕೃತ | **ಸರ್ವೆ ಸ್ಕೆಚ್ ಮಾಡಲು ಇರುವ ಮಾನದಂಡಗಳು**.<br>1) ಅರ್ಜಿದಾರರು ಸರ್ವೆ ಸ್ಕೆಚ್ ಕೋರಿ ಅರ್ಜಿ ಸಲ್ಲಿಸಲು ಪಹಣಿಯಲ್ಲಿನ ಹಕ್ಕುದಾರರಾಗಿರಬೇಕು ಮತ್ತು ಅವರು ಖುದ್ದು ಅಥವಾ ಅವರಿಂದ ದೃಢೀಕರಣ ಪತ್ರ ಪಡೆದಿರುವ ಅಧಿಕೃತ ಪ್ರತಿನಿಧಿಗಳು ಭಾವಚಿತ್ರ ಸಹಿತ ಗುರುತಿನ ಚೀಟಿಯೊಂದಿಗೆ ಸಂಬಂದಿಸಿದ ಹೋಬಳಿ ಮಟ್ಟದ ಅಟಲ್ ಜೀ ಜನಸ್ನೇಹಿ ಕೇಂದ್ರದಲ್ಲಿ ಅಗತ್ಯ ಮಾಹಿತಿಯನ್ನು ವಿವರಿಸಿ ಆಪರೇಟರ್ ಮುಖಾಂತರ ಅರ್ಜಿ ದಾಖಲಿಸಿ, ಸರ್ಕಾರ ನಿಗದಿ ಪಡಿಸಿರುವ ಶುಲ್ಕವನ್ನು ಭರಿಸಬೇಕು<br>2) ನಂತರ ಪ್ರಕರಣವನ್ನು ಅಳತೆಗೆ ವಿತರಿಸಲು ಜಮೀನಿನ ಆಕಾರಬಂದು & ಪಹಣಿಗಳಲ್ಲಿ ದಾಖಲಾಗಿರುವ ವಿಸ್ತೀರ್ಣ ತಾಳೆಯಾಗುತ್ತಿರಬೇಕು<br>3) ಜಮೀನಿನ ಪಹಣಿಯ ಕಾಲಂ 3 & 9 ರಲ್ಲಿಯ ವಿಸ್ತೀರ್ಣ ತಾಳೆಯಾಗುತ್ತಿರಬೇಕು |

ವಾಗಿವೆ; ಇವುಗಳಲ್ಲಿ ಎಷ್ಟು ಅರ್ಜಿಗಳನ್ನು ಪರಿಗಣಿಸಿ ಸರ್ವೆ ಸ್ಕೆಚ್ ಮಾಡಿ ಕೊಡಲಾಗಿದೆ; ಬಾಕಿ ಉಳಿದಿರುವ ಅರ್ಜಿಗಳೆಷ್ಟು; ಈ ಅರ್ಜಿಗಳನ್ನು ವಿಲೇವಾರಿ ಮಾಡಲು ಇರುವ ಅಡೆತಡೆಗಳೇನು? (ತಾಲ್ಲೂಕುವಾರು ಮಾಹಿತಿ ನೀಡುವುದು)

4) ಸಂಬಂಧಿಸಿದ ಜಮೀನಿನ ಭೂದಾಖಲೆಗಳು ಲಭ್ಯವಿರಬೇಕು.
5) ನಂತರ ಮೋಜಿಣಿ ತಂತ್ರಾಂಶದ ಮುಖಾಂತರ ಆನ್‌ಲೈನ್‌ನಲ್ಲಿ FIFO (ಸರದಿ ಸಾಲಿನಂತೆ) ಅಳತೆಗಾಗಿ ಭೂಮಾಪಕರಿಗೆ ತಂತ್ರಾಂಶದ ಮೂಲಕ ವಿತರಿಸಲಾಗುತ್ತದೆ
6) ಅರ್ಜಿದಾರರು ಅಳತೆ ವೇಳೆ ಗುರುತಿನ ಚೀಟಿಯೊಂದಿಗೆ ಹಾಜರಿದ್ದು ತಮ್ಮ ಅನುಭವ ತೋರಿಸಬೇಕು. ಅರ್ಜಿದಾರರ ಹಕ್ಕು & ಅನುಭವ ಆಧರಿಸಿ ನಿಯಮಾನುಸಾರ ಅಳತೆ ಮಾಡಿ ದಾಖಲೆ ತಯಾರಿಸಿ, ನಂತರ ಕಡತದ ಅಪ್‌ಲೋಡ್ ಹಾಗೂ ಪರಿಶೀಲನೆ ಮತ್ತು ಅನುಮೋದನೆಯನ್ನು ಸಹ ಆನ್‌ಲೈನ್‌ನಲ್ಲಿ ನಿರ್ವಹಿಸಲಾಗುತ್ತಿದೆ. ತಂತ್ರಾಂಶದ ಪ್ರತಿ ಹಂತದಲ್ಲಿ ಯೂ FIFO(ಸರದಿ ಸಾಲಿನಂತೆ) ಅಳವಡಿಸಲಾಗಿದ್ದು ಪ್ರಕರಣಗಳ ವಿಲೇವಾರಿಯಲ್ಲಿ ಯಾವುದೇ ವಿಳಂಬಕ್ಕೆ ಅವಕಾಶವಿಲ್ಲದಂತೆ ಕ್ರಮ ವಹಿಸಲಾಗುತ್ತಿದೆ.

**ಚಿಕ್ಕಮಗಳೂರು ಜಿಲ್ಲೆಯಲ್ಲಿ 3 ವರ್ಷಗಳಲ್ಲಿ ಸರ್ವೆ ಸ್ಕೇಚ್ ನೀಡುವಲ್ಲಿ ಸಾಧಿಸಿದ ಪ್ರಗತಿ**

| ತಾಲ್ಲೂಕು | ಆ. ಶಿಲ್ಕು | ಸ್ವೀಕೃತಿ | ಒಟ್ಟು | ವಿಲೇ | ಬಾಕಿ |
|---|---|---|---|---|---|
| ಶೃಂಗೇರಿ | 40 | 396 | 436 | 350 | 86 |
| ಕೊಪ್ಪ | 43 | 665 | 708 | 531 | 177 |
| ನರಸಿಂಹರಾಜಪುರ | 105 | 538 | 643 | 518 | 125 |
| ತರೀಕೆರೆ | 483 | 2963 | 3446 | 2482 | 964 |
| ಕಡೂರು | 1616 | 9378 | 10994 | 6169 | 4825 |
| ಚಿಕ್ಕಮಗಳೂರು | 1056 | 7032 | 8088 | 5909 | 2179 |
| ಮೂಡಿಗೆರೆ | 260 | 1369 | 1629 | 1245 | 384 |
| ಅಜ್ಜಂಪುರ | 593 | 3950 | 4543 | 2640 | 1903 |
| **ಒಟ್ಟು** | **4196** | **26291** | **30487** | **19844** | **10643** |

**-: ಸರ್ವೆ ಸ್ಕೆಚ್ ಇತ್ಯಾದಿ ಪ್ರಕರಣಗಳ ವಿಲೇವಾರಿಗೆ ಇರುವ ಅಡೆತಡೆಗಳು :-**

1) ಆಕಾರಬಂದು ಮತ್ತು ಪಹಣಿಗಳಲ್ಲಿ ದಾಖಲಾಗಿರುವ ವಿಸ್ತೀರ್ಣದಲ್ಲಿ ವ್ಯತ್ಯಾಸಗಳಿರುವುದು
2) ಪಹಣಿಯ ಕಾಲಂ 3 ಮತ್ತು 9 ರಲ್ಲಿಯ ವಿಸ್ತೀರ್ಣದಲ್ಲಿ ವ್ಯತ್ಯಾಸಗಳಿರುವುದು.
3) ಪಹಣಿ ತಿದ್ದುಪಡಿ ಮಾಡಲು ಅವಶ್ಯಕವಾದ ಹಿಂದಿನ ಕಂದಾಯ ದಾಖಲೆಗಳು (ಮ್ಯುಟೇಷನ್, ಪಹಣಿ, ಮಂಜೂರಿ ಆದೇಶಗಳು-ಇತರೆ) ಲಭ್ಯವಾಗದಿರುವುದು.
4) ಜಮೀನಿನ ಮೂಲ ಭೂದಾಖಲೆಗಳು ಶಿಥಿಲವಾಗಿದ್ದು. ಅವುಗಳ ಪುನರ್ ನಿರ್ಮಾಣ ಮಾಡಲು ಹೆಚ್ಚಿನ ಕಾಲಾವಕಾಶಬೇಕಾಗುವುದು
5) ನ್ಯಾಯಾಲಯದಲ್ಲಿ ವಿವಾದಗಳಿರುವುದರಿಂದ
6) ಪ್ರತಿ ಭೂಮಾಪಕರಿಗೆ ಪ್ರತಿ ಮಾಹೆ ಕನಿಷ್ಠ 23 ಕಡತಗಳ ವಿಲೇವಾರಿ ಗುರಿ ನಿಗದಿಪಡಿಸಿದ್ದು, ಭೂಮಾಪಕರ ನಿಗದಿತ ಗುರಿಗಿಂತ ಹೆಚ್ಚಿನ ಪ್ರಕರಣಗಳು ಸ್ವೀಕೃತವಾಗುತ್ತಿರುವ ಕಾರಣ ಪ್ರಕರಣಗಳು ಬಾಕಿ ಉಳಿಯುತ್ತಿರುತ್ತವೆ.

ಮೇಲ್ಕಂಡ ಕಾರಣಗಳಿಂದ ಸರ್ವೆ ಸ್ಕೆಚ್ ಇತ್ಯಾದಿ ಪ್ರಕರಣಗಳ ವಿಲೇವಾರಿಯಲ್ಲಿ ವಿಳಂಬವಾಗುತ್ತಿದೆ

**ಸಂಖ್ಯೆ: ಕಂಇ 204 ಎಸ್‌ಎಸ್‌ಸಿ 2021**

**(ಆರ್.ಅಶೋಕ)**

ಕಂದಾಯ ಸಚಿವರು